# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 572(846) |
| ಸದಸ್ಯರ ಹೆಸರು | : | ಶ್ರೀ ಎನ್.ಅಪ್ಪಾಜಿಗೌಡ [ಸ್ಥಳೀಯ ಸಂಸ್ಥೆಗಳ ಕ್ಷೇತ್ರ] |
| ಉತ್ತರಿಸುವ ದಿನಾಂಕ | : | 11.03.2020 |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ಭೂ ಸುಧಾರಣಾ ಕಾಯಿದೆಯಡಿ ಈ ದಿನಾಂಕಕ್ಕೆ ನಮೂನೆ-7 ಅಥವಾ 48ರಲ್ಲಿ ಯಾವುದೇ ವ್ಯಕ್ತಿಯು ಈಗ ಗೇಣಿ ಅರ್ಜಿಯನ್ನು ದಾಖಲಿಸಲು ಅವಕಾಶವಿರುವುದಿಲ್ಲ ಎಂಬ ಅಂಶ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಈ ದಿನಾಂಕಕ್ಕೆ ಕರ್ನಾಟಕ ಭೂ ಸುಧಾರಣಾ ಕಾಯ್ದೆಯಡಿ ನಮೂನೆ-7 ಅಥವಾ 48ರಲ್ಲಿ ಯಾವುದೇ ವ್ಯಕ್ತಿಯು ಗೇಣಿ ಅರ್ಜಿಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. |
| (ಆ) | ಹಾಗಿದ್ದಲ್ಲಿ, ಕರ್ನಾಟಕ ಭೂ ಸುಧಾರಣೆ ಕಾಯಿದೆಯಡಿ ಒಂದು ಗ್ರಾಮದ ಸ.ನಂ. ಜಮೀನಿನ ಗೇಣಿ ರಹಿತ ದೃಢೀಕರಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರ್‌ಗಳು ನೀಡುತ್ತಿದ್ದು, ಸದರಿ ದೃಢೀಕರಣ ಪತ್ರದ ಕೆಳಗೆ ಈ ದೃಡೀಕರಣ ಪತ್ರವು ಒಂದು ವರ್ಷದ ಅವಧಿಗೆ ಚಾಲ್ತಿಯಲ್ಲಿರುತ್ತದೆ ಎಂದು ನಮೂದಿಸಿ ನೀಡುತ್ತಿರುವ ಅಂಶ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಗೇಣಿ ರಹಿತ ದೃಢೀಕರಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರ್‌ಗಳು ನೀಡುತ್ತಿದ್ದು, ಸದರಿ ದೃಢೀಕರಣ ಪತ್ರವು ಒಂದು ವರ್ಷದ ಅವಧಿಗೆ ಚಾಲ್ತಿಯಲ್ಲಿರುತ್ತದೆ. |
| (ಇ) | ಗೇಣಿ ಅರ್ಜಿಗಳನ್ನು ದಾಖಲಿಸಲು ಈಗ ಅವಕಾಶ ಇಲ್ಲದೆ ಇರುವುದರಿಂದ ತಹಶೀಲ್ದಾರ್‌ರವರ ಕಚೇರಿಯಲ್ಲಿ ನೀಡುತ್ತಿರುವ ಗೇಣಿ ರಹಿತ ದೃಢೀಕರಣ ಪತ್ರದ ಕೆಳಗೆ ಈ ದೃಢೀಕರಣ ಪತ್ರವು ಒಂದು ವರ್ಷ ಚಾಲ್ತಿಯಲ್ಲಿ ಇರುತ್ತದೆ ಎಂಬ ಷರತ್ತನ್ನು ತೆಗೆದುಹಾಕಲು ಸಾರ್ವಜನಿಕ ಹಿತದೃಷ್ಟಿಯಿಂದ ಸರ್ಕಾರ ಕ್ರಮ ಜರುಗಿಸುವುದೇ? (ಸ್ಪಷ್ಟ ಉತ್ತರ ನೀಡುವುದು) | ಈ ದಿನಾಂಕಕ್ಕೆ ಕರ್ನಾಟಕ ಭೂ ಸುಧಾರಣಾ ಕಾಯ್ದೆಯಡಿ ನಮೂನೆ-7 ಅಥವಾ 48ರಲ್ಲಿ ಯಾವುದೇ ವ್ಯಕ್ತಿಯು ಗೇಣಿ ಅರ್ಜಿಯನ್ನು ಸಲ್ಲಿಸಲು ಅವಕಾಶ ಇರುವುದಿಲ್ಲ. ಆದರೂ ಕಾನೂನುಬಾಹಿರ ಪರಭಾರೆಗಳು ಆಗಬಾರದೆಂಬ ಉದ್ದೇಶದಿಂದ ಗೇಣಿ ರಹಿತ ದೃಢೀಕರಣ ಪತ್ರದ ಚಾಲ್ತಿಯನ್ನು ಕೇವಲ ಒಂದು ವರ್ಷದ ಅವಧಿಗೆ ಸೀಮಿತಗೊಳಿಸಲಾಗಿದೆ. |

ಸಂಖ್ಯೆ: ಕಂಇ 04 ಎಲ್‌ಆರ್‌ಎಸ್ 2020

(ಆರ್. ಅಶೋಕ)
ಮಾನ್ಯ ಕಂದಾಯ ಸಚಿವರು